(9)

# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 283
2. ಸದಸ್ಯರ ಹೆಸರು : **ಶ್ರೀ ಕೆ.ಎ. ತಿಪ್ಪೇಸ್ವಾಮಿ**
3. ಉತ್ತರಿಸಬೇಕಾದ ದಿನಾಂಕ : 14.09.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

***

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶಿರಾ ಟೌನ್‌ನಲ್ಲಿರುವ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ರೈತ ಭವನ ಕಟ್ಟಡದಲ್ಲಿರುವ ಎರಡು ಸ್ನಾನದ ಕೊಠಡಿಗಳು ಮತ್ತು ಶೌಚಾಲಯಗಳು ದುಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿರಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿನ ರೈತಭವನವನ್ನು ಸುಮಾರು 22 ವರ್ಷಗಳ ಹಿಂದೆ ನಿರ್ಮಿಸಲಾಗಿದ್ದು, ಇವುಗಳನ್ನು ರೈತರು ಹಾಗೂ ಸಾರ್ವಜನಿಕರು ಉಪಯೋಗಿಸುತ್ತಿರುತ್ತಾರೆ.<br><br>ಸದರಿ ಶೌಚಾಲಯದ ಗುಂಡಿಯು(PIT) ಚಿಕ್ಕದಾಗಿರುವುದರಿಂದ, ಪದೇ ಪದೇ ತುಂಬುತ್ತಿದ್ದು, ನಗರಸಭೆ ವತಿಯಿಂದ ಸ್ವಚ್ಛಗೊಳಿಸಲಾಗುತ್ತಿದೆ. ಪ್ರಸ್ತುತ ಶೌಚಾಲಯಗಳ ಗುಂಡಿಯ ಸಾಮರ್ಥ್ಯವನ್ನು ಹೆಚ್ಚಿಸಲು ಕ್ರಮವಹಿಸಲಾಗುತ್ತಿದೆ. |
| ಆ | ಪ್ರತಿ ಮಂಗಳವಾರದಂದು ಸಾವಿರಾರು ಸಂಖ್ಯೆಯಲ್ಲಿ ತಮ್ಮ ಉತ್ಪನ್ನಗಳನ್ನು ಮಾರಾಟ ಮಾಡಲು ಆಗಮಿಸುವ ರೈತ ಬಂಧುಗಳಿಗೆ ಮೂಲಭೂತ ಸೌಕರ್ಯಗಳ ಕೊರತೆಯನ್ನು ಪರಿಹರಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; (ಮಾಹಿತಿ ನೀಡುವುದು) | ಶಿರಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಉತ್ಪನ್ನ ಮಾರಾಟ ಮಾಡಲು ಆಗಮಿಸುವ ರೈತ ಬಂಧುಗಳಿಗೆ ಬೇಕಾದ ಮೂಲಭೂತ ಸೌಕರ್ಯಗಳಾದ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಸಾರ್ವಜನಿಕ ಶೌಚಾಲಯ ವ್ಯವಸ್ಥೆ, ರೈತಭವನ, ರೈತರು ತರುವ ಉತ್ಪನ್ನಗಳನ್ನು ಮಾರಾಟ ಮಾಡಲು ಮುಚ್ಚು ಹರಾಜುಕಟ್ಟೆ, ಶಾಪ್-ಕಂ-ಗೋದಾಮು, ಗೋದಾಮು, ಕ್ಲೀನಿಂಗ್, ಗ್ರೇಡಿಂಗ್, ಪ್ಯಾಕಿಂಗ್ ಘಟಕ, ಅಸ್ಸೈಯಿಂಗ್ ಲ್ಯಾಬ್, ಕುರಿ ಮತ್ತು ಮೇಕೆ ಸಂತೆ, ರಸ್ತೆ ಮತ್ತು ಚರಂಡಿಗಳನ್ನು ಒದಗಿಸಲು ಕ್ರಮಕೈಗೊಳ್ಳಲಾಗಿದೆ. |
| ಇ | ಮಾರುಕಟ್ಟೆ ಸಮಿತಿಗಳಲ್ಲಿ ಲೈಸೆನ್ಸ್ ಹೊಂದಿರುವ ಹಮಾಲಿಗಳು ಮೃತಪಟ್ಟರೆ, ಅವರ ಕುಟುಂಬಗಳಿಗೆ ಪರಿಹಾರವಾಗಿ ಸರ್ಕಾರ ಹಣಕಾಸಿನ ನೆರವು ನೀಡುವ ಯೋಜನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ಹೌದು,<br>ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಲೈಸನ್ಸ್ ಪಡೆದು ಕಾರ್ಯನಿರ್ವಹಿಸುತ್ತಿರುವ ಹಮಾಲಿಗಳಿಗೆ 2021-22ನೇ ಸಾಲಿಗೆ ಎಲ್‌ಐಸಿ ಸಹಯೋಗದೊಂದಿಗೆ "Group Term Insurance Scheme"ನ್ನು ಜಾರಿಗೆ ತರಲಾಗಿದೆ.<br><br>ಮರಣ ಹೊಂದಿದ ಹಮಾಲಿಗಳಿಗೆ ವಾರಸುದಾರರಿಗೆ ಎಲ್‌ಐಸಿ ವತಿಯಿಂದ ರೂ.1,00,000/- ಗಳ ಪರಿಹಾರ ಮೊತ್ತ ನೀಡಲಾಗುವುದು.<br><br>ಈ ಯೋಜನೆಯ ಅವಧಿ ದಿನಾಂಕ:01.08.2021 ರಿಂದ 01.08.2022ರ ವರೆಗೆ ಜಾರಿಯಲ್ಲಿರುತ್ತದೆ. |

...2

| | | |
|---|---|---|
| ಈ | ಹಾಗಿದ್ದಲ್ಲಿ, ಶಿರಾ ಮಾರುಕಟ್ಟೆ ಸಮಿತಿಯಲ್ಲಿ 4 ಜನ ಲೈಸೆನ್ಸ್ ಹೊಂದಿದ ಹಮಾಲಿಗಳು ಮೃತಪಟ್ಟಿದ್ದು, ಅವರ ಕುಟುಂಬಗಳಿಗೆ ಪರಿಹಾರ ಒದಗಿಸಲಾಗಿದೆಯೇ; ಇಲ್ಲವಾದಲ್ಲಿ ಕಾರಣಗಳೇನು;<br>"ರೈತ ಸಂಜೀವಿನಿ ವಿಮಾ ಪರಿಹಾರ" ವನ್ನು ರೂ. 1.00 ಲಕ್ಷದಿಂದ 5.00 ಲಕ್ಷಗಳಿಗೆ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೆ? (ಮಾಹಿತಿ ನೀಡುವುದು) | ಪ್ರಸ್ತುತ ಚಾಲ್ತಿಯಿರುವ ಶ್ರಮಿಕರ ವಿಮಾ ಯೋಜನೆಯು ದಿನಾಂಕ:01.08.2021 ರಿಂದ ಎಲ್ಐಸಿ ನಿಯಮದಂತೆ ಜಾರಿಯಲ್ಲಿರುತ್ತದೆ.<br><br>ಶಿರಾ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಲ್ಲಿ ಲೈಸನ್ಸ್ ಹೊಂದಿದ ನಾಲ್ಕು ಜನ ಹಮಾಲರು 2019-20 ಹಾಗೂ 2020-21ನೇ ಸಾಲಿನಲ್ಲಿ ಮರಣ ಹೊಂದಿದ್ದು ಸದರಿ ಅವಧಿಯಲ್ಲಿ ಶ್ರಮಿಕರ ವಿಮಾ ಯೋಜನೆಯು ಜಾರಿಯಲ್ಲಿ ಇಲ್ಲದೆ ಇರುವುದರಿಂದ ಈ ಶ್ರಮಿಕರುಗಳಿಗೆ ಪರಿಹಾರ ಧನ ನೀಡಿರುವುದಿಲ್ಲ.<br><br>"ರೈತ ಸಂಜೀವಿನಿ ವಿಮಾ ಪರಿಹಾರ" ವನ್ನು ರೂ. 1.00 ಲಕ್ಷದಿಂದ 5.00 ಲಕ್ಷಗಳಿಗೆ ಹೆಚ್ಚಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಹಂತದಲ್ಲಿ ಹಾಗೂ ಮಂಡಳಿಯ ಹಂತದಲ್ಲಿ ಇರುವುದಿಲ್ಲ. |

**ಸಂಖ್ಯೆ:ಸಿಒ 243 ಎಂಆರ್ಇ 2021**

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು